ಬಿ. ಆರ್. ನರಸಿಂಹಮೂರ್ತಿ

# ಕನ್ನಡ ಸಾಹಿತ್ಯ ಚರಿತ್ರೆ ಹಿನ್ನೆಲೆಯಲ್ಲಿ ಇತಿಹಾಸ ಮತ್ತು ಮತ-ಧರ್ಮಗಳ ನೆಲೆಗಳು

'ಇತಿಹಾಸ'ವೆಂಬುದು ಒಂದು ನಾಡಿನ, ದೇಶದ ಆಗು-ಹೋಗುಗಳನ್ನು ಹೇಗಿದ್ದವೆಂದು ತಿಳಿಸುವ ದಾಖಲೆ. ಒಂದು ನಿರ್ದಿಷ್ಟ ಭೂವಲಯವನ್ನು ಸಂರಕ್ಷಿಸುವ ರಾಜಮನೆತನಗಳ ಸಾಧನೆಯ ಪ್ರತ್ಯೇಕ ನೋಟ. ಹಾಗೆಯೇ ಇದು ಸಮಗ್ರ ಜನತೆಯ ಜೀವನ ಆಲೋಚನಾ ವಿಧಾನದ ಮೇಲೆ ನಿಂತ ಸಂಸ್ಕೃತಿಯ ಅಭ್ಯಾಸವಾಗಿದೆ. ಹೀಗಾಗಿ ನಮ್ಮ ಸಾಂಸ್ಕೃತಿಕ ಪರಂಪರೆಯ ಯಾವುದೇ ಅಂಶವನ್ನು ನಾವು ಒರೆಗಲ್ಲಿಗೆ ಹಾಕಿದರೂ ಸಹ ಅಲ್ಲಿ ಇತಿಹಾಸದ (ರಾಜರ ಹೆಸರು, ಅವರ ಸಾಧನೆ, ಅವರ ಆಚರಣೆ ಇತ್ಯಾದಿ) ದಾಖಲೆ ಕಂಡುಬರುತ್ತದೆ. ಈ ಸಂಸ್ಕೃತಿಯ ಚಾರಿತ್ರಿಕ ಅಂಶಗಳು ಸಾಹಿತ್ಯಚರಿತ್ರೆಯಲ್ಲಿ ವಿವಿಧ ಆಕಾರಗಳನ್ನು ಪಡೆದುಕೊಂಡು ಪ್ರತಿಬಿಂಬಿತವಾಗಿವೆ. ಉದಾ: ಶಾಸನ, ಸಾಹಿತ್ಯ, ಶಾಸ್ತ್ರಸಾಹಿತ್ಯ, ವೈದಿಕಸಾಹಿತ್ಯ, ಜೈನ ಸಾಹಿತ್ಯ, ವೀರಶೈವಸಾಹಿತ್ಯ, ಬ್ರಾಹ್ಮಣಸಾಹಿತ್ಯ ಇತ್ಯಾದಿ.

ಸಾಹಿತ್ಯವೆಂಬುದು ಸಮಾಜದ ಪ್ರತಿಬಿಂಬದಂತೆ ಗತಿಬಿಂಬವಾಗಿದೆ ಎಂಬುದನ್ನು ನೋಡಿದರೆ, ಸಾಹಿತ್ಯವನ್ನು ಸೃಷ್ಟಿಸುವ ಕವಿ ತಾನು ಇದ್ದ ಕಾಲದ ಮತ್ತು ಸಮಾಜದ ಒಂದು ಮುಖ್ಯ ಅಂಗವಾಗಿರುತ್ತಾನೆ. ಹೀಗಾಗಿ ತನ್ನ ಸುತ್ತಣಪರಿಸರದ ಆಗು-ಹೋಗುಗಳನ್ನು ತನ್ನ ಕೃತಿಯಲ್ಲಿ ಸೆರೆ ಹಿಡಿಯುತ್ತಾನೆ. ಅಂದು ನಡೆದು ಹೋದ ಆಚರಣೆಗಳಿರಬಹುದು, ವೀರಜೀವನವಿರಬಹುದು, ಅಂದು ನಡೆದ ಯುದ್ಧಗಳಿರಬಹುದು-ಇವುಗಳನ್ನು ತನ್ನ ಭಾಷಿಕ ವೈಲಕ್ಷಣದಿಂದ ವರ್ಣಿಸುತ್ತಾನೆ. ಹೀಗಾಗುವುದರಿಂದ ಆ ಕೃತಿ ಒಂದು ನಿರ್ದಿಷ್ಟ ಕಾಲದ ಸಾಮಾಜಿಕ ದಾಖಲೆಯಾಗಿ ಅಂದಿನ ಕಾಲದ ಸಮಾಜದ ಇತಿಹಾಸ ರಚನೆ ಮಾಡುವ ಇತಿಹಾಸಜ್ಞರಿಗೆ ಪ್ರತ್ಯಕ್ಷ ದಾಖಲೆಯಾಗುತ್ತದೆ. ಇದರಿಂದಲೇ ಸಾಹಿತ್ಯಚರಿತ್ರೆಯಲ್ಲಿ ಮಹತ್ವದ ಕೃತಿಯೊಂದು ಪಡೆದುಕೊಂಡ ಸ್ಥಾನ, ಅಷ್ಟೇ ಮಹತ್ವದ ಐತಿಹಾಸಿಕ ದಾಖಲೆಯಾಗಿ ಆ ಕೃತಿ ಇತಿಹಾಸ ಶೋಧಕರಿಗೆ ಮೂಲ ಸಾಮಗ್ರಿಯಾಗುತ್ತದೆ. ಆದ್ದರಿಂದಲೇ ಸಾಹಿತ್ಯದ ಅಭ್ಯಾಸಿಗರು ಮತ್ತು ಇತಿಹಾಸದ ಅಭ್ಯಾಸಿಗರು ಸಾಹಿತ್ಯಕೃತಿಯನ್ನು ಕೆಲಸಕ್ಕೆ ಬಾರದೆಂದು ಅಲಕ್ಷಿಸುವಂತಿಲ್ಲ.

ಇತಿಹಾಸವನ್ನು ಪುನರ್ ಪರಿಶೋಧಿಸ ಹೊರಡುವವರು ಸಾಹಿತ್ಯಚರಿತ್ರೆಯನ್ನು ಅಭ್ಯಾಸ ಮಾಡಿದರೆ ನಿರ್ದಿಷ್ಟ ಆಕಾರಗಳು, ಸಾಮಗ್ರಿಗಳು ದೊರೆಯುವುದರಲ್ಲಿ ಸಂಶಯವಿಲ್ಲ. ಉದಾ : ಮೈಸೂರಿನ ಒಡೆಯರ ಇತಿಹಾಸ ರಚನೆ ಮಾಡುವವರು 'ಕಂಠೀರವ ನರಸರಾಜ ವಿಜಯ', 'ಚಿಕ್ಕದೇವರಾಜ ಬಿನ್ನಪ', 'ಚಿಕ್ಕದೇವರಾಜ ವಂಶಾವಳಿ', 'ಅಪ್ರತಿಮ ವೀರಚರಿತ್ರೆ', 'ಚಿಕ್ಕದೇವ ರಾಜ ವಿಜಯ'—ಈ ಮುಂತಾದ ಸಾಹಿತ್ಯಕೃತಿಗಳನ್ನು ಅಭ್ಯಾಸ ಮಾಡುವುದರ ಮೂಲಕ ಇತಿಹಾಸವನ್ನು ನಿರೂಪಿಸುವುದಷ್ಟೇ ಅಲ್ಲದೇ ಸಾಹಿತ್ಯ ಸುಗ್ಗಿಯನ್ನೂ ಸವಿಯಬಹುದಾಗಿದೆ.

ಬನವಾಸಿಯ ಕದಂಬರು, ತಲಕಾಡಿನ ಗಂಗರು, ಬಾದಾಮಿಯ ಚಾಲುಕ್ಯರು, ಮಾನ್ಯಖೇಟದ ರಾಷ್ಟ್ರಕೂಟರು, ವೇಮಲವಾಡದ ಚಾಲುಕ್ಯರು, ಕಲ್ಯಾಣದ ಚಾಲುಕ್ಯರು, ಕಲ್ಯಾಣದ ಕಳಚೂರ್ಯರು, ದ್ವಾರಸಮುದ್ರದ ಹೊಯ್ಸಳರು, ವಿಜಯನಗರದ ಅರಸರು, ಕೆಳದಿ ನಾಯಕರು, ಮೈಸೂರಿನ ಒಡೆಯರು—ಈ ಮುಂತಾದ ಅರಸುಮನೆತನಗಳ ಇತಿಹಾಸ ರಚನೆಗೆ ಸಾಹಿತ್ಯಚರಿತ್ರೆಯಲ್ಲಿ ವಿಶಿಷ್ಟ ಸ್ಥಾನ ಗಳಿಸಿರುವ ಕೃತಿಗಳು ಸಹಾಯಕ್ಕೆ ಬರುವುದಷ್ಟೇ ಅಲ್ಲದೆ, ಪ್ರತ್ಯೇಕವಾದ ದಾಖಲೆಯಾಗುತ್ತವೆ.

ಕರ್ನಾಟಕ ರಾಜಮನೆತನಗಳನ್ನು ಇತಿಹಾಸ ಪುಟಗಳಲ್ಲಿ ಪ್ರತಿಬಿಂಬಿಸಲು ಹಿಂದಿನ ಆಚರಣೆಗಳು, ಸಂಪ್ರದಾಯವೇ ಮುಂತಾದ ಸಾಂಸ್ಕೃತಿಕ ನೆಲೆಗಳನ್ನು ಅರಿಯಲು ಇತಿಹಾಸಜ್ಞರು ಕನ್ನಡ ಸಾಹಿತ್ಯಚರಿತ್ರೆಯ ಸಹಾಯಹಸ್ತವನ್ನು ಪಡೆಯಬೇಕಾಗುತ್ತದೆ. ಇಲ್ಲಿ ಒಂದು ಅಂಶವನ್ನು ಗಮನಿಸಬೇಕು. ಇತಿಹಾಸಜ್ಞರು ಸಾಹಿತ್ಯ ವಿದ್ಯಾರ್ಥಿಯಾಗಿ ಕಾವ್ಯ ವ್ಯಾಸಂಗ ಮಾಡಬೇಕಿಲ್ಲ. ಅವರಿಗೆ ಸರಿತೋರಿದ ರೀತಿಯಲ್ಲಿ ರಾಜಕೀಯ ಇತಿಹಾಸದ ಜ್ಞಾನಕ್ಕೆ ಜೀವಂತಿಕೆಯನ್ನು ತಂದುಕೊಟ್ಟರೆ ಸಾಕು. ಇದೇ ರೀತಿ ಸಾಹಿತ್ಯಜ್ಞರು ಐತಿಹಾಸಿಕ ದೃಷ್ಟಿಯನ್ನು ಬೆಳೆಸಿಕೊಳ್ಳುವುದು ಅವರ ಸಾಹಿತ್ಯದ ಪ್ರಕ್ರಿಯೆಗಳನ್ನು ಹರಿತಗೊಳಿಸುತ್ತದೆ.

ಕರ್ನಾಟಕ ಇತಿಹಾಸದಲ್ಲಿ ಕಂಡುಬರುವ ಒಂದು ಮುಖ್ಯ ವಿಷಯವೆಂದರೆ, ಕನ್ನಡ ಸಾಮ್ರಾಜ್ಯವು ಸದಾ ಧರ್ಮರಾಜ್ಯವಾಗಿತ್ತೆ ಹೊರತು ಎಂದೂ ಧರ್ಮಾಂಧ ರಾಜ್ಯವಾಗಿರಲಿಲ್ಲ. ಪ್ರಸಿದ್ಧ ವಿದ್ವಾಂಸರಾದ ಜಯಸ್ವಾಲರು ಹೇಳಿದಂತೆ, "ಹಿಂದೂ ಜನಾಂಗವು ಪುರೋಹಿತ ವರ್ಗಕ್ಕೆ ರಾಜಾಧಿಕಾರವನ್ನು ಎಂದೂ ಅನುಗ್ರಹಿಸಿರಲಿಲ್ಲವಾಗಿ, ರಾಜನು ದೇವಾಂಶ ಸಂಭೂತನೆಂದು ನಟಿಸಿಕೊಂಡು ಸ್ವೇಚ್ಛಾವೃತ್ತಿಗಿಳಿಯಲು ಸಾಧ್ಯವಿರಲಿಲ್ಲ." ಈ ಮಾತು ಕರ್ನಾಟಕಕ್ಕೂ ಅನ್ವಯವಾಗುವಂತಹುದು. 'ಮತಧರ್ಮ'ವೆಂಬುದು ಇತಿಹಾಸ ರಚನೆಯ ಒಂದು ಅವಿಭಾಜ್ಯ ಅಂಗ. ಅರಸುಮನೆತನಗಳು ನೀಡಿದ ಉದಾರ ಪ್ರೋತ್ಸಾಹದಿಂದ ನಾಡಿನ ಉದ್ದಗಲಕ್ಕೂ ಎಲ್ಲಾ ಧರ್ಮಗಳು ಹರಡಿಕೊಂಡವು.ಹೀಗಾಗಿ ಕನ್ನಡನಾಡಿನಲ್ಲಿ ಪ್ರಚಾರಗೊಂಡ ಪ್ರತಿಯೊಂದು ಧರ್ಮವು ತನ್ನ ಹಿರಿಮೆಯನ್ನು ಜನರಿಗೆ ತಿಳಿಯಹೇಳಲು ಸಾಹಿತ್ಯ ಸುಗ್ಗಿಯನ್ನು ಮಾಡಿದವು ಎಂಬುದನ್ನು ಸಾಹಿತ್ಯಚರಿತ್ರೆ ಮತ್ತು ಇತಿಹಾಸ ಒತ್ತಿ ಹೇಳುತ್ತವೆ.

ಕನ್ನಡ ಸಾಹಿತ್ಯ ಚರಿತ್ರೆಯ ಹಿನ್ನೆಲೆಯಲ್ಲಿ 'ಮತಧರ್ಮ'ದ ನೆಲೆಗಳು ಎಂಬುದು ಇತಿಹಾಸವೆಂಬ ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬವಾಗಿದೆ. ಹೀಗಾಗಿ ಕನ್ನಡನಾಡಿನ ಇತಿಹಾಸ ತಿಳಿಯ ಹೊರಟ ಪ್ರತಿಯೊಬ್ಬನೂ ಕನ್ನಡನಾಡಿನಲ್ಲಿದ್ದ ಧಾರ್ಮಿಕ ಪರಂಪರೆಯನ್ನು ಅರಿಯ ಹೊರಡುತ್ತಾನೆ. ಈ ಧಾರ್ಮಿಕ ಪರಂಪರೆಯನ್ನು ಅರಿಯುವ ಆತನಿಗೆ ಸಿಗುವ ಆಧಾರಗಳು ಎರಡು ರೀತಿಯವು :

೧. ಲಿಖಿತ ದಾಖಲೆಗಳು — ಶಾಸನಗಳು
—ಸಾಹಿತ್ಯ ಕೃತಿಗಳು

೨. ಅಲಿಖಿತ ದಾಖಲೆಗಳು — ಸ್ಮಾರಕಗಳು
— ಶಿಲ್ಪ

ಈ ಮೇಲಿನ ಎರಡು ರೀತಿಯ ಆಧಾರಗಳ ಮೂಲಕ ಕರ್ನಾಟಕದ ಧಾರ್ಮಿಕ ನೆಲೆಗಟ್ಟನ್ನು ವಿವೇಚಿಸಬೇಕಾಗಿದೆ. ಲಿಖಿತ ದಾಖಲೆಗಳ ರೂಪದಲ್ಲಿ ಕಾಣಿಸಿಕೊಳ್ಳುವ ಕನ್ನಡ ಸಾಹಿತ್ಯ ಚರಿತ್ರೆಯು, ಮತಧರ್ಮದ ನೆಲೆಗಟ್ಟಿನಲ್ಲಿ ಬೆಳೆದುಬಂದ ರೀತಿಯನ್ನು ಒಪ್ಪಿಕೊಳ್ಳುತ್ತದೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ನರಸಿಂಹಾಚಾರ್ಯರು, ಬಿ. ಎಂ. ಶ್ರೀಯವರೇ ಮುಂತಾದವರು ವಿಭಾಗಿಸಿರುವ ರೀತಿಯನ್ನು ಕಂಡರೆ ಮತಧರ್ಮ ಬೀರಿದ ಪ್ರಭಾವವನ್ನು ಅರಿಯಬಹುದಾಗಿದೆ. ಜೈನ, ಸಾಹಿತ್ಯ, ವೀರಶೈವ ಸಾಹಿತ್ಯ, ಬ್ರಾಹ್ಮಣ ಸಾಹಿತ್ಯ—ಈ ರೀತಿಯ ವಿಭಾಗ ಕ್ರಮವು ನಮ್ಮ ಸಾಹಿತ್ಯ ಚರಿತ್ರೆಯ ಮೊದಲ ಭಾಗವನ್ನು ಆಕ್ರಮಿಸಿಕೊಂಡಿದೆ. ಅಂದರೆ ಕನ್ನಡ ಸಾಹಿತ್ಯ ಚರಿತ್ರೆಯನ್ನು ಮೊದಲು ಬೆಳೆಸಿದ ಕವಿಗಳು ಧರ್ಮಕ್ಕೆ ಕಟ್ಟುಬಿದ್ದವರೇ ಆಗಿದ್ದಾರೆ. ಪಂಪನಿಂದ ಹಿಡಿದು ಮುದ್ದಣನವರೆಗೆ ಮತಧರ್ಮವೆಂಬುದು ಕವಿಗಳಿಗೆ ಒಂದು 'ದರ್ಶನ'ವಾಗಿತ್ತು. ಇದರಿಂದ ಚೇತನಗೊಂಡು ಧರ್ಮವನ್ನು ರಕ್ಷಿಸಲು, ಬೆಳೆಸಲು ಸಾಹಿತ್ಯವನ್ನು ಬೆಳೆಸಿದರೆಂದು ಅನೇಕರು ಒಪ್ಪುವ ಮಾತಾಗಿದೆ.

ಪರಿಪೂರ್ಣವಾಗಿ ಬೆಳೆದುನಿಂತಿರುವ ನಮ್ಮ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದರೆ ಧರ್ಮವೆಂಬ ಚೌಕಟ್ಟಿನಲ್ಲಿ ವಿವಿಧ ಹೆಸರುಗಳ ಪಟ್ಟಿ ಕಟ್ಟಿಕೊಂಡು ಸಾಹಿತ್ಯ ಬಳಸಿರುವುದನ್ನು ವಿವಿಧ ಘಟ್ಟಗಳಲ್ಲಿ ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಕನ್ನಡದಲ್ಲಿ ಬೌದ್ಧ ಸಾಹಿತ್ಯವು ಬೆಳೆದಂತೆ ತೋರುವುದಿಲ್ಲ. ಆದರೆ ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯವು ವಿಪುಲವಾಗಿದೆ.

ಧಾರ್ಮಿಕ ಪರಂಪರೆಯನ್ನು ಬಿಡದೆ ಸಮಾಜದ ಅವಿಭಾಜ್ಯ ಅಂಗವಾಗಿ ನಿಂತು, ಧರ್ಮ ರಕ್ಷಣೆಯನ್ನು ಮತ್ತು ಸಾಹಿತ್ಯವನ್ನು ಬೆಳೆಸಿದ ಕೀರ್ತಿ ವೈಷ್ಣವರಿಗೆ ಸಲ್ಲುತ್ತದೆ. ಹೀಗೆ ಒಂದು ಕಡೆ ಜನರಿಗೆ ಅರ್ಥವಾಗುವ ರೀತಿಯಲ್ಲಿ ಧಾರ್ಮಿಕ ತತ್ವಗಳನ್ನು ತಿಳಿಯ ಹೇಳಿದ್ದಲ್ಲದೆ ನಾಡಿನ ಸಾಹಿತ್ಯ ಶ್ರೇಷ್ಠತೆಯನ್ನು ಬೆಳೆಸಿದ ಕೀರ್ತಿ ಪ್ರತಿಯೊಂದು ಧರ್ಮದ ಪರೋಕ್ಷ ನೆಲೆಯಾಗಿದ್ದಿರಬಹುದು ಎಂದು ಇತಿಹಾಸ ಮತ್ತು ಕನ್ನಡ ಸಾಹಿತ್ಯ ಚರಿತ್ರೆಯನ್ನು ಅಭ್ಯಾಸ ಮಾಡುವವರಿಗೆ ಕಂಡುಬರುವ ಒಂದು ವಿಶಿಷ್ಟವಾದ ನೆಲೆಗಟ್ಟಾಗಿದೆ.

ಈ ಹಿನ್ನೆಲೆಯಲ್ಲಿ ಇತಿಹಾಸ ಮತ್ತು ಮತ ಧರ್ಮಗಳೆಂಬ ಎರಡು ನೆಲೆಗಳು ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಮುಖ್ಯವಾದ ಸಂಬಂಧಗಳನ್ನು ಒಳಗೊಂಡಿದ್ದು, ಚರಿತ್ರೆಯನ್ನು ಅಭ್ಯಾಸ ಮಾಡುವ ಹಾಗೂ ಧಾರ್ಮಿಕ ನೆಲೆಗಟ್ಟುಗಳನ್ನು ತಿಳಿಯಬಯಸುವವರಿಗೆ ಸಾಹಿತ್ಯ ಚರಿತ್ರೆ ಪ್ರತ್ಯಕ್ಷ ಪರಿಕರಗಳನ್ನು ಒದಗಿಸುವ ಮೂಲಭೂತ ಆಧಾರಸ್ತಂಭವಾಗಿದೆ.